# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 10 (122)

2) ಸದಸ್ಯರ ಹೆಸರು : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)

3) ಉತ್ತರಿಸುವ ದಿನಾಂಕ : 02-03-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಲೆನಾಡು ಜಿಲ್ಲೆಗಳಲ್ಲಿ ಆನೆಗಳ ಹಾವಳಿ ಹೆಚ್ಚಾಗಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಹೌದು.<br><br>ಮಲೆನಾಡು ಜಿಲ್ಲೆಗಳಲ್ಲಿ ಆನೆ ಹಾವಳಿ ತಡೆಗಟ್ಟುವ ನಿಟ್ಟಿನಲ್ಲಿ ಇಲಾಖೆಯು ಈ ಕೆಳಗಿನ ಕ್ರಮಗಳನ್ನು ಕೈಗೊಂಡಿರುತ್ತದೆ. |
| | | ➢ ಕಾಡುಪ್ರಾಣಿಗಳು ಅರಣ್ಯ ಪ್ರದೇಶದಂಚಿನಲ್ಲಿರುವ ಕೃಷಿ ಹಾಗೂ ಸಾರ್ವಜನಿಕರ ಸ್ಥಳಗಳಲ್ಲಿ ದಾಳಿ ಮಾಡುವುದನ್ನು ತಡೆಗಟ್ಟುವ ಸಲುವಾಗಿ ಸೂಕ್ಷ್ಮ ಪ್ರದೇಶಗಳ ಅರಣ್ಯದ ಅಂಚಿನಲ್ಲಿ ಕಾಡಾನೆ ನಿರೋಧಕ ಕಂದಕ ಮತ್ತು ಸೌರಶಕ್ತಿ ಬೇಲಿ ನಿರ್ಮಿಸಿ ನಿರ್ವಹಿಸಲಾಗುತ್ತಿದೆ.<br>➢ ಕಾಡಂಚಿನ ಸೂಕ್ಷ್ಮ ಪ್ರದೇಶಗಳಲ್ಲಿ ಕಾಡಾನೆ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ಉಪಯೋಗಿತ ರೈಲ್ವೆ ಹಳಿಗಳನ್ನು ಬಳಸಿ ರೈಲ್ವೆ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>➢ ಅರಣ್ಯ ಪ್ರದೇಶಗಳಲ್ಲಿ ವನ್ಯ ಪ್ರಾಣಿಗಳಿಗೆ ವರ್ಷವಿಡೀ ಕುಡಿಯುವ ನೀರು ದೊರಕುವಂತೆ ಅರಣ್ಯದಲ್ಲಿರುವ ಕೆರೆಗಳ ಹೂಳು ತೆಗೆಯುವುದು, ಗಲ್ಲಿಪ್ಲಗ್, ಚೆಕ್‌ಡ್ಯಾಮ್, ನಾಲಾಬಂದ್, ಇತ್ಯಾದಿ ಕೆಲಸಗಳನ್ನು ರಕ್ಷಿತಾರಣ್ಯಗಳಲ್ಲಿ ಕೈಗೊಳ್ಳಲಾಗುತ್ತಿದೆ. ಅಲ್ಲದೇ, ಬೋರ್‌ವೆಲ್‌ಗಳನ್ನು ಕೊರೆದು ಸೋಲಾರ್ ಪಂಪ್‌ಗಳನ್ನು ಅಳವಡಿಸಿ ನೀರಿನ ಹೊಂಡಗಳನ್ನು ತುಂಬಲಾಗುತ್ತಿದೆ.<br>➢ ಕಾಡಾನೆಗಳ/ವನ್ಯಜೀವಿಗಳ ಹಾವಳಿ ಹೆಚ್ಚಾಗಿ ಕಂಡುಬರುವ ಸೂಕ್ಷ್ಮ ಪ್ರದೇಶಗಳಲ್ಲಿ ಅವಶ್ಯಕತೆಗನುಗುಣವಾಗಿ Anti Depredation Camp ಗಳನ್ನು ರಚಿಸಿ, ಆನೆಗಳನ್ನು ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Rapid Response Teams (RRT) ತಂಡಗಳನ್ನು ರಚಿಸಿ ವನ್ಯಜೀವಿಗಳ ಹಾವಳಿ ನಿಯಂತ್ರಿಸಲಾಗುತ್ತಿದೆ.<br>➢ ಅರಣ್ಯ ಅಂಚಿನ ಗ್ರಾಮಗಳಲ್ಲಿ ರೈತರಿಗೆ ಶೇ. 50:50ರ ರಿಯಾಯಿತಿಯಲ್ಲಿ ಸೋಲಾರ್ ಬೇಲಿ ನಿರ್ಮಾಣವನ್ನು ಕೈಗೊಳ್ಳಲು ಅರಣ್ಯ ಇಲಾಖೆಯಿಂದ ಶೇ. 50 ರಷ್ಟು ಧನ ಸಹಾಯ ನೀಡಲಾಗುತ್ತಿದ್ದು, ಸದರಿ ಕಾರ್ಯಕ್ರಮವನ್ನು ಇನ್ನೂ ಹೆಚ್ಚಿನ ಗ್ರಾಮಗಳಲ್ಲಿ ಹಮ್ಮಿಕೊಳ್ಳಲಾಗಿದೆ.<br>➢ ಕಾಡಾನೆ ಇರುವಿಕೆ, ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ ಹಾಗೂ ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯನಿರ್ವಹಿಸುತ್ತಿದೆ. |

| | | |
|---|---|---|
| | | ➢ ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಕಾಡಾನೆಗಳನ್ನು ಸೆರೆಹಿಡಿದು ಸ್ಥಳಾಂತರ ಮಾಡಲಾಗಿರುತ್ತದೆ.<br>➢ ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ ಅವುಗಳ ಚಲನ ವಲನಗಳ ಬಗ್ಗೆ ನಿಗಾವಹಿಸಲಾಗುತ್ತಿದೆ. |
| ಆ) | ಆನೆಗಳ ಹಾವಳಿ ತಡೆಗಟ್ಟುವ ಕುರಿತು ಅಧಿಕಾರಿಗಳೊಂದಿಗೆ ಎಷ್ಟು ಬಾರಿ ಮಾನ್ಯ ಅರಣ್ಯ ಸಚಿವರು ಸ್ಥಳ ಪರಿಶೀಲಿಸಿದ್ದಾರೆ; ಯಾವ ಯಾವ ಭಾಗಗಳಿಗೆ ಮಾನ್ಯ ಸಚಿವರು ಭೇಟಿ ನೀಡಿದ್ದಾರೆ; (ಸಂಪೂರ್ಣ ಮಾಹಿತಿ ನೀಡುವುದು) | ಮಲೆನಾಡು ಜಿಲ್ಲೆಗಳಲ್ಲಿ ಆನೆಗಳ ಹಾವಳಿ ತಡೆಗಟ್ಟುವ ಕುರಿತು ಮಾನ್ಯ ಅರಣ್ಯ ಸಚಿವರು ಭೇಟಿ ನೀಡಿದ ಹಾಗೂ ಸ್ಥಳ ಪರಿಶೀಲನೆ ಮಾಡಿದ ವಿವರ ಈ ಕೆಳಗಿನಂತಿದೆ.<br><br>**ಶಿವಮೊಗ್ಗ:** ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ವ್ಯಾಪ್ತಿಯ ಆಗುಂಬೆ (ತಲ್ಲೂರು) ಮತ್ತು ಲಾಳೆಹಳ್ಳಿ ಗ್ರಾಮದ ಭಾಗಗಳಿಗೆ ದಿನಾಂಕ: 28-07-2017 ರಂದು ಭೇಟಿ ನೀಡಿ ಸ್ಥಳ ಪರಿಶೀಲನೆ ಮಾಡಿರುತ್ತಾರೆ.<br><br>**ಚಿಕ್ಕಮಗಳೂರು:** 2018-19ನೇ ಸಾಲಿನಲ್ಲಿ ಮೂಡಿಗೆರೆ ವಲಯ ವ್ಯಾಪ್ತಿಯಲ್ಲಿ ಕಾಡಾನೆ ದಾಳಿಗೊಳಗಾದ ಸ್ಥಳಗಳಿಗೆ ಅಂದಿನ ಅರಣ್ಯ ಸಚಿವರಾದ ಶ್ರೀ ಆರ್. ಶಂಕರ್ ಮತ್ತು ಶ್ರೀ ಸತೀಶ್ ಜಾರಕಿಹೊಳಿ ರವರು ಭೇಟಿ ನೀಡಿ ಆನೆ ಹಾವಳಿ ತಡೆಗಟ್ಟುವ ವಿಷಯದಲ್ಲಿ ಅಧಿಕಾರಿಗಳೊಂದಿಗೆ ಚರ್ಚಿಸಿರುತ್ತಾರೆ.<br><br>**ಹಾಸನ:** ದಿನಾಂಕ: 27.02.2019ರಂದು ಅಂದಿನ ಸಚಿವರಾದ ಶ್ರೀ ಸತೀಶ್ ಜಾರಕಿಹೊಳಿ ರವರು ಸಕಲೇಶಪುರ ವಲಯಕ್ಕೆ ಭೇಟಿ ನೀಡಿ, ಕಾಡಾನೆಯಿಂದ ಹಾನಿಗೊಳಗಾದ ಕೆಲವು ಪ್ರದೇಶಗಳ ಸ್ಥಳ ಪರಿಶೀಲನೆ ಮಾಡಿರುತ್ತಾರೆ. |
| ಇ) | ಆನೆ ದಾಳಿಗೊಳಗಾದ ಕುಟುಂಬಗಳಿಗೆ ಸರ್ಕಾರ ನೀಡಿರುವ ಪರಿಹಾರವೆಷ್ಟು; ಈವರೆಗೂ ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ಮಲೆನಾಡು ಜಿಲ್ಲೆಗಳಲ್ಲಿ ಆನೆ ಒಳಗೊಂಡಂತೆ ಇತರೆ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಪ್ರಾಣ ಹಾನಿ, ಬೆಳೆ ಹಾನಿ, ಸಾಕು ಪ್ರಾಣಿ ಹತ್ಯೆ, ಮಾನವಗಾಯ, ಶಾಶ್ವತ ಅಂಗವಿಕಲತೆ ಹಾಗೂ ಆಸ್ತಿ ನಷ್ಟದ ವಿವರ ಮತ್ತು ಸದರಿ ಪ್ರಕರಣಗಳಲ್ಲಿ ನೀಡಲಾದ ಧಯಾತ್ಮಕ ಧನದ ವಿವರಗಳು ಈ ಕೆಳಗಿನಂತಿದೆ:- |

1. **ಶಿವಮೊಗ್ಗ ಜಿಲ್ಲೆ:**

(ರೂ. ಲಕ್ಷಗಳಲ್ಲಿ)

| ವಿವರ | 2017-18 | | 2018-19 | | 2019-20 (ಜನವರಿ-2020 ರವರೆಗೆ) | |
|---|---|---|---|---|---|---|
| | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ |
| ಬೆಳೆಹಾನಿ | 1226 | 90.12 | 1145 | 63.47 | 264 | 60.60 |
| ಸಾಕು ಪ್ರಾಣಿ ಹತ್ಯೆ | 88 | 7.95 | 123 | 10.83 | 19 | 1.61 |
| ಮಾನವ ಪ್ರಾಣ ಹಾನಿ | 4 | 20.00 | - | - | - | - |
| ಮಾನವ ಗಾಯ | - | - | 09 | 6.03 | 1 | 18.70 |
| ಶಾಶ್ವತ ಅಂಗವಿಕಲತೆ | - | - | - | - | - | - |
| ಆಸ್ತಿನಷ್ಟ | - | - | - | - | - | - |
| **ಒಟ್ಟು** | **1318** | **118.07** | **1277** | **80.33** | **284** | **80.91** |

## 2. ಚಿಕ್ಕಮಗಳೂರು ಜಿಲ್ಲೆ:

(ರೂ. ಲಕ್ಷಗಳಲ್ಲಿ)

| ವಿವರ | 2017-18 | | 2018-19 | | 2019-20 (ಜನವರಿ-2020 ರವರೆಗೆ) | |
|---|---|---|---|---|---|---|
| | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ |
| ಬೆಳೆಹಾನಿ | 1946 | 122.23 | 861 | 791.39 | 531 | 42.17 |
| ಸಾಕು ಪ್ರಾಣಿ ಹತ್ಯೆ | 89 | 8.84 | 47 | 4.75 | 25 | 2.44 |
| ಮಾನವ ಪ್ರಾಣ ಹಾನಿ | 1 | 5.00 | 3 | 15.00 | 4 | 20.00 |
| ಮಾನವ ಗಾಯ | 10 | 1.05 | 9 | 1.84 | 2 | 18.14 |
| ಶಾಶ್ವತ ಅಂಗವಿಕಲತೆ | - | - | - | - | - | - |
| ಆಸ್ತಿನಷ್ಟ | - | - | - | - | - | - |
| **ಒಟ್ಟು** | **2046** | **137.12** | **920** | **812.98** | **562** | **82.75** |

## 3. ಹಾಸನ ಜಿಲ್ಲೆ:

(ರೂ. ಲಕ್ಷಗಳಲ್ಲಿ)

| ವಿವರ | 2017-18 | | 2018-19 | | 2019-20 (ಜನವರಿ-2020 ರವರೆಗೆ) | |
|---|---|---|---|---|---|---|
| | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ |
| ಬೆಳೆಹಾನಿ | 3842 | 188.19 | 1758 | 95.14 | 472 | 29.83 |
| ಸಾಕು ಪ್ರಾಣಿ ಹತ್ಯೆ | 393 | 28.77 | 335 | 26.87 | 86 | 7.83 |
| ಮಾನವ ಪ್ರಾಣ ಹಾನಿ | 6 | 30.00 | 2 | 10.00 | 6 | 32.50 |
| ಮಾನವ ಗಾಯ | 28 | 14.74 | 22 | 7.54 | 17 | 6.87 |
| ಶಾಶ್ವತ ಅಂಗವಿಕಲತೆ | - | - | - | - | 1 | 6.45 |
| ಆಸ್ತಿನಷ್ಟ | - | - | 7 | 0.45 | 5 | 0.44 |
| **ಒಟ್ಟು** | **4269** | **261.7** | **2124** | **140** | **587** | **83.92** |

## 4. ಕೊಡಗು ಜಿಲ್ಲೆ:

(ರೂ. ಲಕ್ಷಗಳಲ್ಲಿ)

| ವಿವರ | 2017-18 | | 2018-19 | | 2019-20 (ಜನವರಿ-2020 ರವರೆಗೆ) | |
|---|---|---|---|---|---|---|
| | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ | ಪ್ರಕರಣ ಸಂಖ್ಯೆ | ಮೊತ್ತ |
| ಬೆಳೆಹಾನಿ | 3814 | 206.47 | 2311 | 132.47 | 1466 | 77.42 |
| ಸಾಕು ಪ್ರಾಣಿ ಹತ್ಯೆ | 52 | 4.86 | 39 | 3.20 | 29 | 2.68 |
| ಮಾನವ ಪ್ರಾಣ ಹಾನಿ | 5 | 25.00 | - | - | 2 | 10.00 |
| ಮಾನವ ಗಾಯ | 15 | 6.13 | 8 | 1.92 | 7 | 2.88 |
| ಶಾಶ್ವತ ಅಂಗವಿಕಲತೆ | - | - | - | - | - | - |
| ಆಸ್ತಿನಷ್ಟ | 28 | 275.00 | 20 | 1.87 | 31 | 2.96 |
| **ಒಟ್ಟು** | **3914** | **517.46** | **2378** | **139.46** | **1535** | **95.94** |

ಈ) ಕಾಡಿನಿಂದ ನಾಡಿಗೆ ಆನೆಗಳು ಬಾರದ ರೀತಿ ತಡೆಗಟ್ಟಲು ಯಾವ ಕ್ರಮ ಕೈಗೊಳ್ಳಲಾಗಿದೆ; ಎಲ್ಲೆಲ್ಲಿ ಕೈಗೊಳ್ಳಲಾಗಿದೆ ಹಾಗೂ ಇದಕ್ಕೆ ತಗುಲಿದ ವೆಚ್ಚ ಎಷ್ಟು; (ವಿವರ ಒದಗಿಸುವುದು)

ಮಲೆನಾಡು ಜಿಲ್ಲೆ/ವಿಭಾಗಗಳಲ್ಲಿ ಕಾಡಾನೆ ಹಾವಳಿಯನ್ನು ತಡೆಗಟ್ಟಲು ಆನೆ ನಿರೋಧಕ ಕಂದಕ, ಸೋಲಾರ್ ತಂತಿಬೇಲಿ ನಿರ್ಮಾಣ, ಉಪಯೋಗಿತ ರೈಲು ಹಳಿ ತಡೆ ಬೇಲಿ ನಿರ್ಮಾಣ ಕಾಮಗಾರಿಗಳನ್ನು ಮಾಡಲಾಗಿದ್ದು, ಇನ್ನುಳಿದಂತೆ ನಾಡಿಗೆ ಬಂದ ಕಾಡಾನೆಗಳನ್ನು ಇಲಾಖಾ ಸಿಬ್ಬಂದಿಗಳು ಸ್ಥಳೀಯರ ಸಹಕಾರದೊಂದಿಗೆ ಕಾಡಿಗೆ ಓಡಿಸುವ ಹಾಗೂ ಪಟಾಕಿ ಸಿಡಿಸಿ ಹಿಮ್ಮೆಟ್ಟಿಸುವ ಕಾರ್ಯಗಳನ್ನು ಕೈಗೊಳ್ಳಲಾಗಿರುತ್ತದೆ. ಈ ಸಂಬಂಧ ವಿಭಾಗವಾರು ಭರಿಸಿದ ವೆಚ್ಚದ ವಿವರ ಈ ಕೆಳಗಿನಂತಿದೆ.

**(ರೂ. ಲಕ್ಷಗಳಲ್ಲಿ)**

| ಕ್ರ ಸಂ | ವಿಭಾಗ | 2017-18 | 2018-19 | 2019-20 |
|---|---|---|---|---|
| 1 | ಭದ್ರಾ ಹುಲಿ ಯೋಜನೆ, ಚಿಕ್ಕಮಗಳೂರು | 204.18 | 180.29 | 195.22 |
| 2 | ಚಿಕ್ಕಮಗಳೂರು (ಪ್ರಾ) | 41.82 | 116.68 | 136.25 |
| 3 | ಕೊಪ್ಪ (ಪ್ರಾ) | - | 55.00 | 55.00 |
| 4 | ಶಿವಮೊಗ್ಗ (ಪ್ರಾ) | 3.73 | 10.00 | 12.36 |
| 5 | ಶಿವಮೊಗ್ಗ (ವಜೀ) | 381.31 | 355.59 | 414.76 |
| 6 | ಭದ್ರಾವತಿ (ಪ್ರಾ) | 190.56 | 217.12 | 150.00 |
| 7 | ಸಾಗರ (ಪ್ರಾ) | 6.00 | - | - |
| 8 | ಹಾಸನ (ಪ್ರಾ) | 156.18 | 200.00 | 234.35 |
| 9 | ಮಡಿಕೇರಿ (ಪ್ರಾ) | 867.34 | 626.63 | 377.70 |
| 10 | ವಿರಾಜಪೇಟೆ (ಪ್ರಾ) | 238.53 | 530.88 | 471.61 |
| 11 | ಮಡಿಕೇರಿ (ವಜೀ) | 424.81 | 426.35 | 432.75 |
| 12 | ನಾಗರಹೊಳೆ | 202.70 | 408.60 | 381.05 |

ಉ) ಪರಿಹಾರ ನೀಡದೇ ಬಾಕಿ ಉಳಿದಿರುವ ಕುಟುಂಬಗಳೆಷ್ಟು; ಪರಿಹಾರ ನೀಡುವಲ್ಲಿ ವಿಳಂಬವಾಗುತ್ತಿರಲು ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಉಳಿದ ಕುಟುಂಬಗಳಿಗೆ ಪರಿಹಾರ ನೀಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು)

ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಇ-ಪರಿಹಾರದ ಮೂಲಕ ದಯಾತ್ಮಕ ಧನ ಪಾವತಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಅದರಂತೆ, ಮಲೆನಾಡು ಪ್ರದೇಶಗಳಾದ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಇ-ಪರಿಹಾರದ ಮೂಲಕ ಈವರೆಗೆ 7072 ಅರ್ಜಿಗಳು ಸ್ವೀಕೃತವಾಗಿದ್ದು, ಈ ಪೈಕಿ 4048 ಅರ್ಜಿಗಳನ್ನು ಇ-ಪರಿಹಾರದ ಮೂಲಕ ಇತ್ಯರ್ಥ ಪಡಿಸಲಾಗಿದೆ. ಇನ್ನು 3024 ಅರ್ಜಿಗಳನ್ನು ಇ-ಪರಿಹಾರದ ಮೂಲಕ ಇತ್ಯರ್ಥಪಡಿಸಲು ಬಾಕಿ ಇರುತ್ತದೆ. ಬಾಕಿ ಇರುವ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಅನುದಾನದ ಲಭ್ಯತೆಯ ಮೇರೆಗೆ ದಯಾತ್ಮಕ ಧನವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುತ್ತಿದೆ.

ಸಂಖ್ಯೆ: ಅಪಜೀ 29 ಎಫ್ ಡಬ್ಲ್ಯೂ ಎಲ್ 2020

29/02/2020

(ಆನಂದ್ ಸಿಂಗ್)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು